# ಕರ್ನಾಟಕ ವಿಧಾನ ಪರಿಷತ್

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : ೮೦೩ (೯12)
2. ಸದಸ್ಯರ ಹೆಸರು : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)
3. ಉತ್ತರಿಸುವ ದಿನಾಂಕ : 21.12.2021
4. ಉತ್ತರಿಸುವ ಸಚಿವರು : ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕೆ.ಐ.ಎ.ಡಿ.ಬಿ.ಯಲ್ಲಿ ನಿವೇಶನ ಹಂಚಿಕೆ ಪಡೆಯಲು ಇರುವ ಮಾನದಂಡಗಳೇನು; (ವಿವರ ನೀಡುವುದು) | ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಲ್ಲಿ ನಿವೇಶನ ಹಂಚಿಕೆ ಪಡೆಯಲು ಇರುವ ಮಾನದಂಡಗಳ ವಿವರಗಳನ್ನು ಅನುಬಂಧ-1ರಲ್ಲಿ ಒದಗಿಸಿದೆ. |
| (ಆ) | ನಿವೇಶನ ಸ್ವಾಧೀನ ಪಡೆದ ನಂತರ ಎಷ್ಟು ವರ್ಷಗಳಲ್ಲಿ ಕೈಗಾರಿಕೆ ಪ್ರಾರಂಭಿಸಬೇಕಾಗಿದೆ; ಈ ಸಂಬಂಧ ಪಾಲಿಸಬೇಕಾದ ನಿಯಮಗಳೇನು; (ವಿವರ ನೀಡುವುದು) | ಕೆ.ಐ.ಎ.ಡಿ.ಬಿ.ಯಿಂದ ಹಂಚಿಕೆಯಾದ ಜಮೀನಿನ ಸ್ವಾಧೀನ ಪಡೆದು ಗುತ್ತಿಗೆ ಕರಾರು ಪತ್ರ ನೆರವೇರಿಸಿದ ದಿನಾಂಕದಿಂದ ಸೂಕ್ಷ್ಮ, ಸಣ್ಣ, ಮಧ್ಯಮ ಹಾಗೂ ದೊಡ್ಡ ಉದ್ದಿಮೆಗಳು ೩ ವರ್ಷ ಮತ್ತು ಮೆಘಾ, ಅಲ್ಟ್ರಾ ಮೆಘಾ ಹಾಗೂ ಸೂಪರ್ ಮೆಘಾ ಉದ್ದಿಮೆಗಳು ೫ ವರ್ಷಗಳ ಒಳಗಾಗಿ ಕೈಗಾರಿಕೆಯನ್ನು ಪ್ರಾರಂಭಿಸಬೇಕಾಗಿರುತ್ತದೆ.<br>ಹಂಚಿಕೆದಾರರು ಕೆ.ಐ.ಎ.ಡಿ.ಬಿ.ಯಿಂದ ಕಟ್ಟಡ ನೀಲಿ ನಕ್ಷೆ ಅನುಮೋದನೆ ಹಾಗೂ ಸಂಬಂಧಪಟ್ಟ ಪ್ರಾಧಿಕಾರಗಳಿಂದ ಅಗತ್ಯ ಅನುಮೋದನೆಯನ್ನು ಪಡೆದು, ಕೈಗಾರಿಕೆಯನ್ನು ಪ್ರಾರಂಭಿಸಬೇಕಾಗಿರುತ್ತದೆ. |

| | | |
|---|---|---|
| (ಇ) | ಸ್ವಾಧೀನ ಪಡೆದು 10 ವರ್ಷಗಳಾದರೂ ಕೈಗಾರಿಕೆ ಪ್ರಾರಂಭಿಸದಿದ್ದರೂ ಸಹ, ನಿವೇಶನ ಹಂಚಿಕೆಯನ್ನು ರದ್ದು ಪಡಿಸದೆ, ಸದರಿ ನಿವೇಶನವನ್ನು ಮೂಲ ಹಂಚಿಕೆದಾರರು ಸೂಚಿಸಿದ ಬೇರೊಬ್ಬ ಉದ್ದಿಮೆದಾರರಿಗೆ ವರ್ಗಾಯಿಸಬಹುದೇ; ಈ ಪ್ರಕರಣದಲ್ಲಿ ಪಾಲಿಸಬೇಕಾದ ನಿಯಮಗಳೇನು; (ವಿವರ ನೀಡುವುದು) | ಕೆ.ಐ.ಎ.ಡಿ.ಬಿ.ಯಿಂದ ಹಂಚಿಕೆಯಾದ ಜಮೀನಿನ ಗುತ್ತಿಗೆ ಹಕ್ಕನ್ನು ಮೂಲ ಹಂಚಿಕೆದಾರರು ಸೂಚಿಸಿದ ಬೇರೆ ಉದ್ದಿಮೆದಾರರಿಗೆ ವರ್ಗಾಯಿಸುವ ಪ್ರಕರಣಗಳಲ್ಲಿ ಚಾಲ್ತಿಯಲ್ಲಿರುವ ಮಾರ್ಗಸೂಚಿಗಳನ್ನು ಅನುಬಂಧ-2 ರಲ್ಲಿ ಒದಗಿಸಿದೆ. |
| (ಈ) | ಹಂಚಿಕೆ ಪಡೆದ ಉದ್ದಿಮೆದಾರರು ಕೈಗಾರಿಕೆ ಪ್ರಾರಂಭಿಸದಿದ್ದರೂ ಸಹ, ಹಂಚಿಕೆದಾರರು ಖಾಲಿ ನಿವೇಶನಕ್ಕೆ ಉದ್ಯಾನವನ, ರಸ್ತೆ ಮತ್ತು ವಾಹನ ನಿಲುಗಡೆ ನಿರ್ಮಾಣ ಮಾಡಿದರೆ ಅದನ್ನು ಕೈಗಾರಿಕೆ ಪ್ರಾರಂಭಿಸಲಾಗಿದೆ ಎಂದು ಪರಿಗಣಿಸಬಹುದೇ; | ಯೋಜನೆಗಳನ್ನು ಅನುಷ್ಠಾನಗೊಳಿಸಿ, ಅದರಲ್ಲಿ ಉದ್ಯಾನವನ, ರಸ್ತೆ ಮತ್ತು ವಾಹನ ನಿಲುಗಡೆ ನಿರ್ಮಾಣ ಮಾಡಿದ್ದಲ್ಲಿ, ಅವುಗಳನ್ನು ಪರಿಗಣಿಸಲಾಗುವುದು. |
| (ಉ) | ಈ ರೀತಿ ಎಷ್ಟು ಪ್ರಕರಣಗಳನ್ನು ಕೈಗಾರಿಕೆ ಪ್ರಾರಂಭಿಸಲಾಗಿದೆ ಎಂದು ಪರಿಗಣಿಸಲಾಗಿದೆಯೇ; (ಪೂರ್ಣ ವಿವರ ನೀಡುವುದು) | ಉದ್ಭವಿಸುವುದಿಲ್ಲ. |

| | | |
|---|---|---|
| (ಊ) | ಹಂಚಿಕೆದಾರರು ಹಂಚಿಕೆ ಪಡೆಯುವಾಗ ಮತ್ತು ನಕ್ಷೆಯ ಅನುಮತಿಯಂತೆ ಕಟ್ಟಡ ನಿರ್ಮಿಸದಿದ್ದರೂ ಸಹ ಅವರಿಗೆ ಕ್ರಯ ಪತ್ರ (ಸೇಲ್ ಡೀಡ್) ಮತ್ತು ಗುತ್ತಿಗೆ ಹಕ್ಕನ್ನು (ಲೀಸ್-ಕಂ-ಸೇಲ್ ಡೀಡ್) ಮೂಲ ಹಂಚಿಕೆದಾರರು ಸೂಚಿಸಿದ, ಬೇರೊಬ್ಬ ಉದ್ದಿಮೆದಾರರಿಗೆ ವರ್ಗಾಯಿಸಬಹುದೇ; (ವಿವರ ನೀಡುವುದು) | ಹಂಚಿಕೆದಾರರಿಗೆ ನಿವೇಶನದ ಶುದ್ಧ ಕ್ರಯ ನೀಡುವ ಪ್ರಕರಣಗಳಲ್ಲಿ ಗುತ್ತಿಗೆ ಕರಾರು ಪತ್ರದ ಷರತ್ತುಗಳಂತೆ, ಯೋಜನೆಯನ್ನು ಅನುಷ್ಠಾನಗೊಳಿಸಿ, ಶೇಕಡಾ 50ರಷ್ಟು ಜಮೀನನ್ನು ಬಳಕೆ ಮಾಡಿದ ನಂತರ, ಮಂಡಳಿಯ ಇತರೆ ಶುಲ್ಕಗಳನ್ನು ಪಾವತಿಸಿಕೊಂಡು ಶುದ್ಧ ಕ್ರಯ ಪತ್ರ ನೆರವೇರಿಸಲಾಗುವುದು.<br><br>ಹಂಚಿಕೆ ಪಡೆದ ಉದ್ದಿಮೆದಾರರು ಗುತ್ತಿಗೆ ಹಕ್ಕನ್ನು ಬೇರೆ ಉದ್ದಿಮೆದಾರರಿಗೆ ವರ್ಗಾಯಿಸಲು ಕೋರಿರುವ ಪ್ರಕರಣಗಳಲ್ಲಿ ಮಂಡಳಿಯಲ್ಲಿ ಗುತ್ತಿಗೆ ಹಕ್ಕು ವರ್ಗಾವಣೆಗೆ ಅನುಸರಿಸುವ ಮಾರ್ಗಸೂಚಿಗಳ ಅನ್ವಯ, ಮೂಲ ಹಂಚಿಕೆದಾರರು ಯೋಜನೆ ಅನುಷ್ಠಾನಗೊಳಿಸಲು ಹೂಡಿರುವ ಬಂಡವಾಳ / ಖರ್ಚು ಮಾಡಿರುವ ವೆಚ್ಚದ ಆಧಾರದ ಮೇರೆಗೆ, ವರ್ಗಾವಣೆ ಶುಲ್ಕ, ಇತ್ಯಾದಿಗಳನ್ನು ಪಾವತಿಸಿಕೊಂಡು ಗುತ್ತಿಗೆ ಹಕ್ಕು ವರ್ಗಾವಣೆ ಮಾಡಲಾಗುವುದು. |
| (ಋ) | ಹಾಗಾದರೆ, ಈ ರೀತಿ ಎಷ್ಟು ಪ್ರಕರಣಗಳಲ್ಲಿ ವರ್ಗಾಯಿಸಲಾಗಿದೆ? (ಪೂರ್ಣ ವಿವರ ನೀಡುವುದು) | |

ಸಂಖ್ಯೆ: ಸಿಐ 259 ಐಎಪಿ (ಇ) 2021

(ಮುರುಗೇಶ ಆರ್. ನಿರಾಣಿ)

ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು

ಅನುಬಂಧ-1

**ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ, ಬೆಂಗಳೂರು**
**ಕೈಗಾರಿಕಾ ನಿವೇಶನಗಳ ಹಂಚಿಕೆಯ ನಿಯಮಾವಳಿಗಳು**

ಕೈಗಾರಿಕಾ ಉದ್ದೇಶಿತ ಯೋಜನೆಗಳಿಗೆ ಸರ್ಕಾರವು ಭೂಮಿಯನ್ನು ಕೆಐಎಡಿಬಿ ಮೂಲಕ ಕೈಗಾರಿಕೆಗಳಿಗೆ ಹಂಚಿಕೆ ಮಾಡಲು ಈ ಕೆಳಕಂಡ ಸಕ್ಷಮ ಪ್ರಾಧಿಕಾರಗಳಿಂದ ಅನುಮೋದನೆ ಪಡೆದ ನಂತರ, ನಿಗದಿತ ಅರ್ಜಿ ನಮೂನೆಯೊಂದಿಗೆ ಮಂಡಳಿಯ ಕೇಂದ್ರ ಕಛೇರಿಗಳಿಗೆ/ ವಲಯ ಕಛೇರಿಗಳಿಗೆ ನಿವೇಶನ ಹಂಚಿಕೆಗಾಗಿ ಅರ್ಜಿಗಳನ್ನು ಸಲ್ಲಿಸಬೇಕಾಗುವುದು.

| | |
|---|---|
| ಕರ್ನಾಟಕ ಸರ್ಕಾರದ ಸನ್ಮಾನ್ಯ ಮುಖ್ಯ ಮಂತ್ರಿಗಳ ಅಧ್ಯಕ್ಷತೆಯಲ್ಲಿನ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡುವ ಸಮಿತಿ. | ರೂ. 500 ಕೋಟಿಗಳಿಗೂ ಮೀರಿದ ಬಂಡವಾಳ ಹೂಡಿಕೆಯ ಯೋಜನೆಗಳನ್ನು ಪರಿಶೀಲಿಸಿ, ಅನುಮೋದನೆ ನೀಡಲಾಗುವುದು. |
| ಕರ್ನಾಟಕ ಸರ್ಕಾರದ ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆಗಳ ಮಂತ್ರಿಗಳ ಅಧ್ಯಕ್ಷತೆಯಲ್ಲಿನ ರಾಜ್ಯ ಮಟ್ಟದ ಏಕ ಗವಾಕ್ಷಿ ಒಪ್ಪಿಗೆ ನೀಡುವ ಸಮಿತಿ. | ರಾಜ್ಯದಲ್ಲಿ ರೂ. 15 ಕೋಟಿಗಳಿಗಿಂತ ಹೆಚ್ಚಿನ ಮತ್ತು ರೂ. 500 ಕೋಟಿಗಳ ಒಳಗಿನ ಬಂಡವಾಳ ಹೂಡಿಕೆಯ ಕೈಗಾರಿಕಾ ಯೋಜನೆಗಳನ್ನು ಪರಿಶೀಲಿಸಿ, ಅನುಮೋದನೆ ನೀಡಲಾಗುವುದು. |
| ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿನ ಜಿಲ್ಲಾ ಮಟ್ಟದ ಏಕ ಗವಾಕ್ಷಿ ಸಮಿತಿ. | ರೂ.15 ಕೋಟಿಗಳವರೆಗೆ ಬಂಡವಾಳ ಹೂಡುವ ಸಣ್ಣ ಕೈಗಾರಿಕಾ ಘಟಕಗಳ ಅರ್ಜಿಗಳನ್ನು ಪರಿಶೀಲಿಸಿ, ಅನುಮೋದನೆ ನೀಡಲಾಗುವುದು. |

ನಿವೇಶನ ಕೋರಿ ನಿಗದಿತ ಅರ್ಜಿಗಳ ಜೊತೆಯಲ್ಲಿ ಈ ಕೆಳಕಂಡ ದಾಖಲೆಗಳೊಂದಿಗೆ ಕೆ.ಐ.ಎ.ಡಿ.ಬಿ. ಕಛೇರಿಗೆ ಅಥವಾ ಜಿಲ್ಲಾ ಕೈಗಾರಿಕಾ ಕೇಂದ್ರ ಕಛೇರಿಗೆ ಸಲ್ಲಿಸುವುದು. ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಗ್ರಾಮಾಂತರ ಜಿಲ್ಲೆ ಹಾಗೂ ರಾಮನಗರ ಜಿಲ್ಲೆಗಳಲ್ಲಿನ ಕೈಗಾರಿಕಾ ಪ್ರದೇಶಗಳಿಗೆ ನಿವೇಶನ ಕೋರುವ ಅರ್ಜಿಗಳನ್ನು ಕೆ.ಐ.ಎ.ಡಿ.ಬಿ ಕೇಂದ್ರ ಕಛೇರಿ/ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ಇಲ್ಲಿಗೆ ಸಲ್ಲಿಸುವುದು.

- ವಿವರವಾದ ಯೋಜನಾ ವರದಿ ದ್ವಿಪ್ರತಿಯಲ್ಲಿ
- ಸಂಘದ ವಿವರಣಾ ಪತ್ರ ಮತ್ತು ನಿಯಮಾವಳಿಗಳು/ಪಾಲುಗಾರಿಕೆ ಕರಾರು ಪತ್ರ/ ಮೆಮೊರೆಂಡಮ್ ಅಂಡ್ ಆರ್ಟಿಕಲ್ಸ್ ಆಫ್ ಅಸೋಷಿಯೇಷನ್ ಅನ್ವಯಿಸುವಂತೆ ದ್ವಿಪ್ರತಿಯಲ್ಲಿ.
- ಉದ್ಯೋಗ ಆಧಾರ್ ನೋಂದಣಿ ಪ್ರಮಾಣ ಪತ್ರ.
- ಭೂಮಿಯ ಉದ್ದೇಶಿತ ಉಪಯೋಗವನ್ನು ಸೂಚಿಸುವ ನಕ್ಷೆ.

- ಮುಂಗಡ ಠೇವಣಿಯಾಗಿ ಎಕರೆಯೊಂದಕ್ಕೆ ರೂ. 5000/-ಗಳು.
- ರಾಜ್ಯ ಉನ್ನತ ಮಟ್ಟದ ಅನುಮೋದನಾ ಸಮಿತಿ / ರಾಜ್ಯ ಮಟ್ಟದ ಏಕ ಗವಾಕ್ಷಿ ಸಮಿತಿ / ಜಿಲ್ಲಾ ಮಟ್ಟದ ಏಕ ಗವಾಕ್ಷಿ ಸಮಿತಿ ಅನುಮೋದನಾ ಪತ್ರ.

**ಕೈಗಾರಿಕಾ ನಿವೇಶನಗಳ ಹಣ ಪಾವತಿಸುವ ನಿಯಮಗಳು**

| | |
|---|---|
| ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ರಾಮನಗರ, ಕೋಲಾರ, ತುಮಕೂರು, ಮೈಸೂರು, ಹಾಸನ, ದಾರವಾಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಕೈಗಾರಿಕಾ ಪ್ರದೇಶಗಳ ನಿವೇಶನ ಬೆಲೆಯನ್ನು ಪಾವತಿಸುವ ವಿಧಾನ (ಸಾಮಾನ್ಯ ವರ್ಗದ ಉದ್ದಿಮೆದಾರರಿಗೆ) | ಅ. ಅರ್ಜಿಯ ಜೊತೆ ನಿವೇಶನ ಹಂಚಿಕೆಯ ಬೆಲೆಯ ಶೇ 30 ರಷ್ಟು ಹಣವನ್ನು ಮುಂಗಡವಾಗಿ ಪಾವತಿಸುವುದು.<br>ಆ. ನಿವೇಶನ ಹಂಚಿಕೆಯಾದ ದಿನದಿಂದ 90 ದಿನಗಳ ಒಳಗಾಗಿ ನಿವೇಶನದ ಬಾಕಿ 70% ಬೆಲೆಯನ್ನು ಪಾವತಿಸುವುದು. |
| ರಾಜ್ಯದ ಉಳಿದ ಜಿಲ್ಲೆಗಳಲ್ಲಿ ಕೈಗಾರಿಕಾ ಪ್ರದೇಶಗಳ ನಿವೇಶನ ಬೆಲೆಯನ್ನು ಪಾವತಿಸುವ ವಿಧಾನ. (ಸಾಮಾನ್ಯ ವರ್ಗದ ಉದ್ದಿಮೆದಾರರಿಗೆ) | ಅ ಅರ್ಜಿಯ ಜೊತೆ ನಿವೇಶನ ಹಂಚಿಕೆಯ ಬೆಲೆಯ ಶೇ 20 ರಷ್ಟು ಹಣವನ್ನು ಮುಂಗಡವಾಗಿ ಪಾವತಿಸುವುದು.<br>ಆ ನಿವೇಶನ ಹಂಚಿಕೆಯಾದ ದಿನದಿಂದ 90 ದಿನಗಳ ಒಳಗಾಗಿ ನಿವೇಶನದ ಬಾಕಿ 80% ಬೆಲೆಯನ್ನು ಪಾವತಿಸುವುದು. |
| ಮಹಿಳಾ ಉದ್ದಿಮೆದಾರರು ನಿವೇಶನದ ಬೆಲೆಯನ್ನು ಪಾವತಿಸುವ ವಿಧಾನ. | ಅ. ಅರ್ಜಿಯ ಜೊತೆ ನಿವೇಶನ ಹಂಚಿಕೆಯ ಬೆಲೆಯ ಶೇ. 10 ರಷ್ಟು ಮೊತ್ತವನ್ನು ಮುಂಗಡ ಠೇವಣಿಯಾಗಿ ಅರ್ಜಿಯ ಜೊತೆ ಪಾವತಿಸುವುದು.<br>ಆ. ನಿವೇಶನ ಹಂಚಿಕೆಯಾದ ದಿನದಿಂದ 180 ದಿನಗಳ ಒಳಗಾಗಿ ನಿವೇಶನದ ಬಾಕಿ 90% ಬೆಲೆಯನ್ನು ಪಾವತಿಸುವುದು. |
| ಹಿಂದುಳಿದ ವರ್ಗದವರು, ಅಲ್ಪಸಂಖ್ಯಾತರು, ಅಂಗವಿಕಲ ಉದ್ದಿಮೆದಾರರು ಮತ್ತು ಮಾಜಿ ಸೈನಿಕರು ನಿವೇಶನದ ಬೆಲೆಯನ್ನು ಪಾವತಿಸುವ ವಿಧಾನ. | ಇ. ಅರ್ಜಿಯ ಜೊತೆ ನಿವೇಶನ ಹಂಚಿಕೆಯ ಬೆಲೆಯ ಶೇ. 20/30 ರಷ್ಟು ಮೊತ್ತವನ್ನು ಮುಂಗಡ ಠೇವಣಿಯಾಗಿ ಅರ್ಜಿಯ ಜೊತೆ ಪಾವತಿಸುವುದು.<br>ಈ. ನಿವೇಶನ ಹಂಚಿಕೆಯಾದ ದಿನದಿಂದ 6 ಸಮ ತ್ರೈಮಾಸಿಕ ಕಂತುಗಳಲ್ಲಿ ನಿವೇಶನದ ಬಾಕಿ ಶೇ.80/70 ಬೆಲೆಯನ್ನು ಪಾವತಿಸುವುದು. |
| ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಉದ್ದಿಮೆದಾರರು | ಉ. ಮಂಡಳಿಯಿಂದ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಉದ್ದಿಮೆದಾರರಿಗೆ ಹಂಚಿಕೆ ಮಾಡಲಾಗುವ ಜಮೀನಿನ ಹಂಚಿಕೆ ದರದಲ್ಲಿ ಶೇ.50ರ ರಿಯಾಯಿತಿಯನ್ನು |

| | |
|---|---|
| | ನೀಡಲಾಗುವುದು ಮತ್ತು ಈ ಮೊತ್ತವನ್ನು ಸರ್ಕಾರದಿಂದ SCP/TSP ಯೋಜನೆಯಡಿ ಬಿಡುಗಡೆಯಾಗುವ ಅನುದಾನದಲ್ಲಿ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.<br>ಊ. ಮಂಡಳಿಯು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಉದ್ದಿಮೆದಾರರಿಂದ ರಿಯಾಯಿತಿ ನೀಡಿದ ನಿವೇಶನ ಹಂಚಿಕೆ ದರದ ಮೇಲೆ ಶೇ.10ರ ಹಣವನ್ನು ಅರ್ಜಿಯ ಜೊತೆಗೆ ಪ್ರಾರಂಭಿಕ ಠೇವಣಿಯನ್ನಾಗಿ ಪಾವತಿಸಿಕೊಂಡು ಹಂಚಿಕೆ ಪತ್ರ ನೀಡುವುದು ಮತ್ತು ರಿಯಾಯಿತಿ ನೀಡಿದ ನಿವೇಶನ ಹಂಚಿಕೆ ದರದ ಬಾಕಿ ಶೇ.40ರ ಹಣವನ್ನು ಹಂಚಿಕೆ ಪತ್ರದ ದಿನಾಂಕದಿಂದ 180 ದಿವಸಗಳ ಒಳಗಾಗಿ ಪಾವತಿಸಿಕೊಳ್ಳುವುದು.<br>ಋ. ರಿಯಾಯಿತಿ ನೀಡಿದ ನಿವೇಶನ ಹಂಚಿಕೆ ದರದ ಬಾಕಿ ಶೇ. 50 ರ ಹಣವನ್ನು 8 ಸಮ ತ್ರೈಮಾಸಿಕ ಕಂತುಗಳಲ್ಲಿ ಶೇ.9.50 ರಷ್ಟು ಬಡ್ಡಿಯೊಂದಿಗೆ ಸ್ವಾಧೀನಪತ್ರ ನೀಡಿದ ದಿನಾಂಕದಿಂದ ವಸೂಲಾತಿ ಮಾಡಿಕೊಳ್ಳುವುದು ಮತ್ತು ಸದರಿ ಮೊತ್ತವನ್ನು ನಿಗದಿತ ಅವಧಿಯಲ್ಲಿ ಪಾವತಿಸುವ ಕುರಿತು ಉದ್ದಿಮೆದಾರರಿಂದ ಸೂಕ್ತ ಮುಚ್ಚಳಿಕೆ ಪತ್ರ ಪಡೆದುಕೊಳ್ಳಲಾಗುವುದು. |

ಹಂಚಿಕೆಯಾದ ನಿವೇಶನದ ಪೂರ್ಣ ಮೊತ್ತವನ್ನು ಪಾವತಿಸಿದ ನಂತರ ಹಂಚಿಕೆಯ ದೃಢೀಕರಣದ ಪತ್ರವನ್ನು ನೀಡಿ ನಿವೇಶನದ ಸ್ವಾಧೀನ ಪತ್ರ ನೀಡಲಾಗುವುದು. 2 ಎಕರೆವರೆಗಿನ ವಿಸ್ತೀರ್ಣಕ್ಕೆ ಗುತ್ತಿಗೆ ಕರಾರು ನೆರವೇರಿಸಿದ ದಿನದಿಂದ 10 ವರ್ಷಗಳ ಅವಧಿಗೆ ಹಾಗೂ 2 ಎಕರೆಗಿಂತ ಹೆಚ್ಚಿನ ವಿಸ್ತೀರ್ಣಕ್ಕೆ ಗುತ್ತಿಗೆ ಮತ್ತು ಮಾರಾಟ ಕರಾರು ನೆರವೇರಿಸಿದ ದಿನದಿಂದ 10 ವರ್ಷಗಳ ಅವಧಿಗೆ ಗುತ್ತಿಗೆ ಮತ್ತು ಮಾರಾಟ ಪತ್ರ ನೆರವೇರಿಸಿಕೊಡಲಾಗುವುದು ಹಾಗೂ ಏಕ ಘಟಕ ಸಂಕೀರ್ಣ ಯೋಜನೆಗಳಿಗೆ ಜಮೀನು ಹಂಚಿಕೆಯನ್ನು 15 ವರ್ಷಗಳ ಅವಧಿಗೆ ಗುತ್ತಿಗೆ ಮತ್ತು ಮಾರಾಟ ಕರಾರು ಪತ್ರ ನೆರವೇರಿಸಿಕೊಡಲಾಗುವುದು.

****

ಅನುಬಂಧ-2

**File No.C I/105/SPQ/2021-ID-C&I SEC**

## ಕರ್ನಾಟಕ ಸರ್ಕಾರ

ಸಂಖ್ಯೆ: ಸಿಐ 105 ಎಸ್ ಪಿಕ್ಯೂ(ಇ) 2021

ಕರ್ನಾಟಕ ಸರ್ಕಾರ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ 29.07.2021.

ಇವರಿಂದ:

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು.

ಇವರಿಗೆ:

ಮುಖ್ಯ ಕಾರ್ಯನಿರ್ವಹಣಾಧಿಕಾರಿ
ಹಾಗೂ ಕಾರ್ಯನಿರ್ವಾಹಕ ಸದಸ್ಯರು,
ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ,
ಖನಿಜ ಭವನ, ರೇಸ್ ಕೋರ್ಸ್ ರಸ್ತೆ,
ಬೆಂಗಳೂರು.




ಮಾನ್ಯರೆ,

ವಿಷಯ: **Revision of Guidelines for transfer of Lease Hold Rights in Respect of allotments made in the Industrial Areas developed by KIADB.**

ಉಲ್ಲೇಖ: ಪತ್ರ ಸಂಖ್ಯೆ: IADB/HO/FA/3649/2021-22, ದಿನಾಂಕ: 08.07.2021.

---*---

ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯ ಕೈಗಾರಿಕಾ ಪ್ರದೇಶ ಹಾಗೂ ಏಕಘಟಕ ಸಂಕೀರ್ಣಗಳಿಗೆ ಜಮೀನು ಹಂಚಿಕೆ ಮಾಡಿದ ಪ್ರಕರಣಗಳಲ್ಲಿ ಗುತ್ತಿಗೆ ಹಕ್ಕುಗಳ ವರ್ಗಾವಣೆ (Transfer of Leasehold rights) ಮಾರ್ಗಸೂಚಿಗಳನ್ನು ಪರಿಷ್ಕರಿಸಲು ಸಲ್ಲಿಸಲಾದ ಉಲ್ಲೇಖಿತ ಪ್ರಸ್ತಾವನೆಗೆ ಸರ್ಕಾರದ ಅನುಮೋದನೆ ನೀಡಲಾಗಿದೆ ಎಂದು ತಿಳಿಸಲು ನಿರ್ದೇಶಿತನಾಗಿದ್ದೇನೆ.

5(A)

*(ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರಿಂದ ಅನುಮೋದಿಸಲ್ಪಟ್ಟಿದೆ)*

ತಮ್ಮ ನಂಬುಗೆಯ,

ಎನ್. ಕುಮಾರ್
(ಎನ್. ಕುಮಾರ್.) 29/7/2021
ಸರ್ಕಾರದ ಅಧೀನ ಕಾರ್ಯದರ್ಶಿ (ಕೈ.ಅ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

29/07/2021

C u/p
LA
ACR
Shilpa

**Approved Transfer of lease hold rights policy by the Government on 29.07.2021 as recommended by the Board in its meeting held on 17.06.2021.**

**A: Wherein the allotment rates are revised in respect of Industrial Areas:**

| As per clauses contained in the lease cum sale agreement (Cl.11 (2) & 12(iii)) and 99 years lease basis (Cl.20.iii) & 22) | Approved Transfer of lease hold rights policy wherein the allotment rates are revised in respect of Industrial Areas |
|---|---|
| 1 | 3 |
| Wherein (i) Banks / financial institutions including KSIIDC & KSFC auction the plot on default in repayment of loan availed by the allottee.<br><br>(ii) In the event of the allottee reducing the share holdingless than 51% of the total share-holdings.<br><br>(iii) If the allottee willing to transfer the lease hold rights to the prospective entrepreneur on mutual consent. | a) The new entrepreneur shall pay 25% of the difference between the allotted price and the current price, if the project is implemented substantially i.e. Lessee should have invested more than 50% of the total project cost [excluding land cost] approved by the concerned Investment Approval Committee/ Allotment Committee of the Board, which should be evidenced by a certificate from the financial institutions, or, from the Chartered Accountants.<br>Also the new entrepreneur has to pay 10% of the land cost paid by the original allottee as transferring charges.<br>b) The new entrepreneur shall pay 50% of the difference between the allotted price and the current price, if the project is implemented partially i.e. Lessee should have invested more than 25% and up to 50% of the total project cost [excluding land cost] approved by the concerned Investment Approval Committee/ Allotment Committee of the Board which should be evidenced by a certificate from the financial institutions, or, from the Chartered Accountants.<br>Also the new entrepreneur has to pay 10% of the land cost paid by the original allottee as transferring charges.<br>c) The new entrepreneur shall pay 75% of the difference between the allotted price and the current price if the project is less implemented i.e. Lessee should have invested more than 15% and less than 25% of the total project cost [excluding land cost] approved by the concerned Investment Approval Committee/ Allotment Committee of the Board, which should be evidenced by a certificate from the financial institutions, or, from the Chartered Accountants.<br>Also the new entrepreneur has to pay 10% of the land cost paid by the original allottee as transferring charges. |

**B: if the allotment rate & current rate are same in the Industrial Areas at the time of considering the transfer of lease hold rights.**

| As per clauses contained in the lease cum sale agreement (Cl.11 (2) & 12(iii)) and 99 years lease basis (Cl.20.iii) & 22) | Approved transfer of lease hold rights policy if the allotment rate & current rate are same in the Industrial Area. |
|---|---|
| Wherein (i) Banks / financial institutions including KSIIDC & KSFC auction the plot on default in repayment of loan availed by the allottee.<br><br>(ii) In the event of the allottee reducing the share holdingless than 51% of the total share-holdings.<br><br>(iii) If the allottee willing to transfer the lease hold rights to the prospective entrepreneur on mutual consent. | a) The new entrepreneur shall pay a penalty of 20% of the total cost paid for the land, provided that, the project is implemented substantially i.e. Lessee should have invested more than 50% of the total project cost [excluding land cost] approved by the concerned Investment Approval Committee/ Allotment Committee of the Board, which should be evidenced by a certificate from the financial institutions, or, from the Chartered Accountants. Also the new entrepreneur has to pay 10% of the land cost paid by the original allottee as transferring charges.<br>b) The new entrepreneur shall pay a penalty of 30% of the total cost paid for the land, provided that, the project is implemented partially i.e. Lessee should have invested more than 25% and up to 50% of the total project cost [excluding land cost] approved by the concerned Investment Approval Committee/ Allotment Committee of the Board, which should be evidenced by a certificate from the financial institutions, or, from the Chartered Accountants.<br>Also the new entrepreneur has to pay 10% of the land cost paid by the original allottee as transferring charges.<br>c) The new entrepreneur shall pay a penalty of 40% of the total cost paid for the land, where the project is less implemented i.e. Lessee should have invested more than 15% and up to 25% of the total project cost [excluding land cost] approved by the concerned Investment Approval Committee/ Allotment Committee of the Board, which should be evidenced by a certificate from the financial institutions, or, from the Chartered Accountants. Also the new entrepreneur has to pay 10% of the land cost paid by the original allottee as transferring charges. |

C: No transfer of lease hold rights shall be made in respect of allotments made in favour of Single Unit Complexes and allotments made in Industrial Areas, if the investment on the project is less than 15% of the total project cost [excluding land cost] approved by the concerned Investment Approval Committee.

*****